





(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ಹೇಳಿರಿ- ನಾನು ಮುಂಜಾವಿನ ಪ್ರಭುವಿನ[1] ಅಭಯ ಯಾಚಿಸುತ್ತೇನೆ-

قُلْ اَعُوْذُ بِرَبِّ الْفَلَقِ ۝١

2. ಅವನು(ಅಲ್ಲಾಹನು) ಸೃಷ್ಟಿಸಿದ ಸಕಲ ವಸ್ತುಗಳ ಕೇಡಿನಿಂದ,

مِنْ شَرِّ مَا خَلَقَ ۝٢

3. ಇರುಳಿನ ಅಂಧಕಾರವು ಕವಿದಾಗ ಉಂಟಾಗುವ ಕೇಡಿನಿಂದ-[2]

وَمِنْ شَرِّ غَاسِقٍ اِذَا وَقَبَ ۝٣

4. ಗಂಟುಗಳ ಮೇಲೆ ಊದುವವರ (ಅಥವಾ ಹಾಗೆ ಊದುವ ಸ್ತ್ರೀಯರ) ಕೇಡಿನಿಂದ-[3]

وَمِنْ شَرِّ النَّفّٰثٰتِ فِى الْعُقَدِ ۝٤

5. ಮತ್ತು ಮತ್ಸರಿಯು ಮತ್ಸರ ಪಡುವಾಗ ಅವನ ಕೇಡಿನಿಂದ.[4] (ಅಭಯ ಯಾಚಿಸುತ್ತೇನೆ).

وَمِنْ شَرِّ حَاسِدٍ اِذَا حَسَدَ ۝٥

---

1. ಅರ್ಥಾತ್- ರಾತ್ರಿಯ ಅಂಧಕಾರವನ್ನು ಸೀಳಿ ಉಜ್ವಲವಾದ ಪ್ರಭಾತವನ್ನು ತರುವ ಪ್ರಭುವಿನ.
2. ಏಕೆಂದರೆ ಹೆಚ್ಚಿನೆಲ್ಲಾ ಅಕ್ರಮ ಅನ್ಯಾಯಗಳು ರಾತ್ರಿಯ ವೇಳೆಯೇ ನಡೆಯುತ್ತವೆ ಮತ್ತು ಕ್ರೂರ ಜಂತುಗಳು ಸಹ, ರಾತ್ರಿಯ ವೇಳೆಯಲ್ಲೇ ಹೊರಡುತ್ತವೆ.
3. ಅರ್ಥಾತ್- ಮಾಟ ಮಾಡುವ ಸ್ತ್ರೀ-ಪುರುಷರು.
4. ಅರ್ಥಾತ್- ಅಸೂಯೆಯಿಂದಾಗಿ ಅವರು ಏನಾದರೂ ನಷ್ಟ ಉಂಟುಮಾಡಲು ಪ್ರಯತ್ನಿಸಿದಾಗ.